# ತರಗತಿ ಚಟುವಟಿಕೆಗಳು

**ದೇವಕಿ ಲಕ್ಷ್ಮೀನಾರಾಯಣ್ ಮತ್ತು ರಿಚಾ ಗೋಸ್ವಾಮಿ**

**ಹೋಲಿಸಿ ಮತ್ತು ವ್ಯತ್ಯಾಸಗಳನ್ನು ಗುರುತಿಸಿ: ಸಾಮ್ಯತೆ ಇದ್ದರೂ ಭಿನ್ನ**

ವಿಷಯಗ್ರಹಿಕೆಯಲ್ಲಿ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲವು ಮಹತ್ತರ ಪಾತ್ರವನ್ನು ನಿರ್ವಹಿಸುತ್ತದೆ. ದಿನನಿತ್ಯದ ಜೀವನದಲ್ಲಿ ಈ ಕೌಶಲವನ್ನು ನಾವು ಬಳಸುತ್ತೇವೆ; ಉದಾಹರಣೆಗೆ ಎರಡು ಸಿಹಿತಿಂಡಿಗಳ ಬೆಲೆಗಳನ್ನು ಹೋಲಿಸುವುದು ಅಥವಾ ಯಾವ ಅಂಗಡಿ ಉತ್ತಮ ಗುಣಮಟ್ಟದ ವಸ್ತುಗಳನ್ನು ಕಡಿಮೆ ಬೆಲೆಗೆ ಮಾರುತ್ತದೆ ಎಂದು ತಿಳಿದುಕೊಳ್ಳುವುದು ಹೀಗೆ. ಬಹಳಷ್ಟು ಬಾರಿ ಈ ಕೌಶಲವು ಸಹಜವಾಗಿ ತಾನಾಗಿಯೇ ಬೆಳೆದು ಬರುತ್ತದೆ ಎಂದು ಭಾವಿಸಲಾಗುತ್ತದೆ. ಆದರೂ ಸಾಕ್ಷರತಾ ಕೌಶಲಗಳನ್ನು ಬೆಳೆಸುವ ಉದ್ದೇಶದಿಂದ ಮಕ್ಕಳಿಗೆ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ತಂತ್ರಗಳನ್ನು ಕಲಿಸುವುದು ಅಗತ್ಯವಾಗಿದೆ. ಈ ತಂತ್ರಗಳು ಸಾಮ್ಯತೆಗಳು ಮತ್ತು ವ್ಯತ್ಯಾಸಗಳನ್ನು ಸ್ಪಷ್ಟವಾಗಿ ಹೊರತರಲು ಬಳಸುವ ಭಾಷೆಯನ್ನು ಗಮನಿಸಲು ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತವೆ. ಸಾಮ್ಯತೆ ಮತ್ತು ವ್ಯತ್ಯಾಸಗಳಿಗೆ ಒತ್ತು ನೀಡುವುದರಿಂದ ಹಲವು ವಿವರಗಳ ಕಡೆಗೆ ಮಕ್ಕಳ ಗಮನ ಸೆಳೆಯುವುದು ಸಾಧ್ಯವಾಗುತ್ತದೆ. ಇದರಿಂದ ಮಕ್ಕಳು ಮಾಹಿತಿಯನ್ನು ಸ್ಪಷ್ಟಪಡಿಸಿಕೊಳ್ಳಲು, ಮಾಹಿತಿಯನ್ನು ವರ್ಗೀಕರಿಸಿ ವಿಮರ್ಶಾತ್ಮಕವಾಗಿ ಯೋಚಿಸುವಂತೆ ಆಗಲು, ಅಗತ್ಯಗಳಿಗೆ ಅನುಗುಣವಾಗಿ ವಿವರಗಳನ್ನು ಬಳಸಿಕೊಳ್ಳಲು ಹಾಗೂ ವಿಷಯ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಸಹಾಯಕವಾಗುತ್ತದೆ. ಭಿನ್ನ ವಸ್ತುಗಳ ನಡುವೆ ಸಾಮ್ಯಗಳನ್ನು ಗುರುತಿಸುವ ಮತ್ತು ಸಾಮ್ಯ ವಸ್ತುಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸುವ ಪ್ರಕ್ರಿಯೆಯಲ್ಲಿ ಮಕ್ಕಳಿಗೆ ನೆರವಾಗುವಂತಹ ನಿರ್ದಿಷ್ಟ ಚಟುವಟಿಕೆಗಳನ್ನು ತರಗತಿಯಲ್ಲಿ ಬಳಸಬಹುದಾಗಿದೆ. ಇಂತಹ ದೃಷ್ಟಿಕೋನಗಳು ಮಕ್ಕಳಿಗೆ ತಾವು ಕಲಿಯುತ್ತಿರುವ ವಿಷಯದಲ್ಲಿ ಹೊಸ ಒಳನೋಟಗಳನ್ನು ಬೆಳೆಸಿಕೊಳ್ಳಲು ಸಹಾಯಕವಾಗುತ್ತವೆ. ಈ ಕೌಶಲಗಳನ್ನು ಇತರ ವಿಷಯಗಳಲ್ಲೂ ಬಳಸಬಹುದಾಗಿದೆ. ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳನ್ನು ಬೋಧಿಸುವುದರ ಪ್ರಮುಖ ಪ್ರತಿಫಲವೆಂದರೆ ಮಕ್ಕಳಲ್ಲಿ ವಿಷಯಗ್ರಹಿಕೆಯ ಸೂಕ್ಷ್ಮತೆಗಳನ್ನು ಸುಲಭವಾಗಿ ಬೆಳೆಸಬಹುದಾಗಿದೆ.

ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳನ್ನು ಬೆಳೆಸಲು ಬಳಸಬಹುದಾದ ಹಲವು ಚಟುವಟಿಕೆಗಳಿವೆ. ಅವುಗಳಲ್ಲಿ ಕೆಲವೆಂದರೆ ವಿಭಿನ್ನ ಅಂತ್ಯಗಳನ್ನು ಹೊಂದಿದ ಎರಡು ಸಮಾನ

ಕಥೆಗಳನ್ನು ಹೋಲಿಸುವುದು, ಒಬ್ಬರೇ ಲೇಖಕರ ವಿಭಿನ್ನ ಕಥೆಗಳನ್ನು ಹೋಲಿಸುವುದು, ಒಂದೇ ಘಟನೆಯನ್ನು ಕುರಿತು ಎರಡು ಬೇರೆ ಬೇರೆ ವೃತ್ತ ಪತ್ರಿಕೆಗಳು ಅಥವಾ ಸುದ್ದಿ ವಾಹಿನಿಗಳು ಮಾಡಿದ ವರದಿಯನ್ನು ಹೋಲಿಸುವುದು, ಮುಂತಾದುವು.

**ಶಿಕ್ಷಕರಿಗೆ ಸಾಮಾನ್ಯ ಮಾರ್ಗಸೂಚಿಗಳು**

ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳನ್ನು ಬೆಳೆಸುವಲ್ಲಿ ಶಿಕ್ಷಕರು ಅನುಸರಿಸಬಹುದಾದ ಕೆಲವು ಮಾರ್ಗಸೂಚಿಗಳು ಈ ಕೆಳಗಿನಂತಿವೆ:

- ಈ ಚಟುವಟಿಕೆಗೆ ಈ ಮುಂದೆ ಸೂಚಿಸಿದ ಯಾವುದಾದರೂ ಸಾಮಗ್ರಿಗಳನ್ನು ಬಳಸಿ- ಚಿತ್ರಗಳು, ಪಠ್ಯಗಳು, ದೃಶ್ಯಸುರುಳಿಗಳು, ಭಾವಚಿತ್ರಗಳು, ಇತ್ಯಾದಿ.
- ವಿವಿಧ ಪಠ್ಯಪ್ರಕಾರಗಳನ್ನು ಈ ಚಟುವಟಿಕೆಗಳ ಭಾಗವಾಗಿ ಬಳಸಬಹುದಾಗಿದೆ- ಕಥೆಗಳು, ವಿವರಣೆಗಳು, ಜಾಹೀರಾತುಗಳು, ಕೋಷ್ಟಕಗಳು, ಚರ್ಚೆಗಳು, ಇತ್ಯಾದಿ.
- ಚಟುವಟಿಕೆಯ ಉದ್ದೇಶದಲ್ಲಿ ಸ್ಪಷ್ಟತೆಯಿರಲಿ – ವಿದ್ಯಾರ್ಥಿಗಳು ಯಾವ ಸಂಗತಿಗಳಿಗೆ ಗಮನಕೊಡಬೇಕೆಂದು ನೀವು ಬಯಸುತ್ತೀರಿ? ವ್ಯತ್ಯಾಸಗಳ ಮೇಲೋ ಅಥವಾ ಸಾಮ್ಯತೆಗಳ ಮೇಲೋ, ಇತ್ಯಾದಿ.
- ಉದ್ದೇಶಕ್ಕೆ ಸೂಕ್ತವಾಗಿ ಹೊಂದಿಕೆಯಾಗುವ ವಿಷಯ ವಸ್ತುವನ್ನು ಆರಿಸಿಕೊಳ್ಳಿ.
- ಚಟುವಟಿಕೆಯ ಉದ್ದೇಶವನ್ನು ಯಶಸ್ವಿಯಾಗಿ ಸಾಧಿಸಲು ಪೂರಕವಾದ ನಮೂನೆಗಳನ್ನು ಸಿದ್ಧಪಡಿಸಿಕೊಳ್ಳಿ.
- ವಿಷಯ, ವಸ್ತುವಿನ ಜೊತೆಗೆ ಸಾಮ್ಯತೆಗಳು ಮತ್ತು ವ್ಯತ್ಯಾಸಗಳನ್ನು ಸೂಚಿಸಲು ಬಳಸುವ ಭಾಷೆಗೂ ಒತ್ತು ನೀಡಿ. ವಿಶೇಷವಾಗಿ ವಿದ್ಯಾರ್ಥಿಗಳ ತರಗತಿ ಮಟ್ಟಕ್ಕೆ ಅನುಗುಣವಾದ ಭಾಷಾ ಬಳಕೆಗೆ ಗಮನ ನೀಡಿ.

ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳನ್ನು ಬೇರೆ ಬೇರೆ ತರಗತಿಗಳಲ್ಲಿ ಬೆಳೆಸುವುದು ಹೇಗೆ ಎಂಬುದನ್ನು ಈ ಮುಂದಿನ ಮೂರು ಚಟುವಟಿಕೆಗಳು ನಿರೂಪಿಸುತ್ತವೆ.

**ಚಟುವಟಿಕೆ 1**

**ಉದ್ದೇಶ:** ಸಾಮ್ಯತೆಯ ಜೊತೆಗೆ ವ್ಯತ್ಯಾಸಗಳನ್ನು ಹೊಂದಿರುವ ಬೇರೆ ಬೇರೆ ನಾಣ್ಯಗಳನ್ನು ಬಳಸಿ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳನ್ನು ಬೆಳೆಸುವುದು.

ಈ ಚಟುವಟಿಕೆಯನ್ನು 3 ನೇ ತರಗತಿಯ ವಿದ್ಯಾರ್ಥಿಗಳಿಗೆ ಬಳಸಬಹುದಾಗಿದೆ.

**ಅವಧಿ:** 40 ನಿಮಿಷಗಳು

**ಬೋಧನಾ ಸಂಪನ್ಮೂಲಗಳು:**

- ರೂ. 1, 2 ಮತ್ತು 5 ಮುಖಬೆಲೆಯ 4 ರಿಂದ 5 ಪ್ಯಾಕೆಟ್ ನಾಣ್ಯಗಳು (ಪ್ಯಾಕೆಟ್‌ಗಳ ಸಂಖ್ಯೆ ಗುಂಪುಗಳ ಸಂಖ್ಯೆಗೆ ಅನುಗುಣವಾಗಿ ಅಗತ್ಯಕ್ಕೆ ತಕ್ಕಷ್ಟು ಇರಲಿ)
- ಭೂತಗನ್ನಡಿ
- ಹೋಲಿಕೆಗೆ ಅಗತ್ಯವಾದ ಪ್ರಶ್ನೆಗಳ ಪಟ್ಟಿ (ಈ ಮುಂದಿನಂತೆ)

ನಾಣ್ಯಗಳ ಹೋಲಿಕೆಗೆ ಬಳಸಬಹುದಾದ ಪ್ರಶ್ನೆಗಳ ಪಟ್ಟಿ:

1. ನಾಣ್ಯದ ಮೇಲೆ ನಮೂದಿಸಿರುವ ಮುಖಬೆಲೆ ಎಷ್ಟು? ನಾಣ್ಯವನ್ನು ಹೆಸರಿಸಿ.
2. ನಾಣ್ಯದ ಬಣ್ಣ ಯಾವುದು?
3. ನಾಣ್ಯದ ಆಕಾರವೇನು?
4. ನಾಣ್ಯದ ಗಾತ್ರ ಎಷ್ಟು?
5. ನಾಣ್ಯದ ಅಂಚು ಹೇಗಿದೆ?
6. ನಾಣ್ಯದ ಮೇಲೆ ನಮೂದಿಸಿರುವ ವರ್ಷ ಯಾವುದು?
7. ನಾಣ್ಯದ ಮುಖಭಾಗದಲ್ಲಿ ಏನನ್ನು ಮುದ್ರಿಸಲಾಗಿದೆ?
8. ನಾಣ್ಯದ ಹಿಂಬದಿಯಲ್ಲಿ ಏನನ್ನು ಮುದ್ರಿಸಲಾಗಿದೆ?
9. ನಾಣ್ಯದ ಬೆಲೆ ಎಷ್ಟು?

**ಪ್ರಕ್ರಿಯೆ:**

- ವಿದ್ಯಾರ್ಥಿಗಳನ್ನು ನಾಲ್ಕು ಅಥವಾ ಐದು ಗುಂಪುಗಳಾಗಿ ವಿಂಗಡಿಸಿ.
- ಪ್ರತಿಯೊಂದು ಗುಂಪಿಗೂ ನಾಣ್ಯಗಳ ಒಂದು ಪ್ಯಾಕೆಟ್, ಒಂದು ಭೂತಗನ್ನಡಿ ಮತ್ತು ಪ್ರಶ್ನೆಗಳ ಪಟ್ಟಿಯನ್ನು ನೀಡಿ.
- ಮಕ್ಕಳು ಪ್ರತಿಯೊಂದು ನಾಣ್ಯವನ್ನು ಪರೀಕ್ಷಿಸಿ, ತಮ್ಮಲ್ಲೇ ಚರ್ಚಿಸಿ ನಂತರ ನೀಡಿದ ಪ್ರಶ್ನೆಗಳಿಗೆ ಉತ್ತರ ನೀಡುವಂತೆ ಸೂಚಿಸಿ.
- ಶಿಕ್ಷಕರು ಮಕ್ಕಳ ಚರ್ಚೆಯನ್ನು ಅವಲೋಕಿಸಿ ಅಭಿಪ್ರಾಯ, ಭಿನ್ನತೆಗಳೇನಾದರೂ ಇದ್ದಲ್ಲಿ ಸೂಕ್ತ ಮಾರ್ಗದರ್ಶನ ನೀಡಿ.

**ಚಟುವಟಿಕೆ 2**

**ಉದ್ದೇಶ:** ಸಾಮ್ಯತೆ ಇರುವ ಆದರೆ ವ್ಯತ್ಯಾಸಗಳನ್ನು ಹೊಂದಿದ ಬೇರೆ ಬೇರೆ ಕಥೆಗಳನ್ನು ಬಳಸಿ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳನ್ನು ಬೆಳೆಸುವುದು.

ಈ ಚಟುವಟಿಕೆಯನ್ನು ನಾಲ್ಕನೇ ತರಗತಿಯ ವಿದ್ಯಾರ್ಥಿಗಳಿಗೆ ಬಳಸಬಹುದಾಗಿದೆ.

**ಬೋಧನಾ ಸಂಪನ್ಮೂಲಗಳು:**

- ಕೆಲವು ವ್ಯತ್ಯಾಸಗಳನ್ನು ಹೊಂದಿದ ಎರಡು ಸಮಾನ ಕಥೆಗಳು.
- ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಪ್ರಕ್ರಿಯೆಯಲ್ಲಿ ಗಮನ ಕೇಂದ್ರೀಕರಿಸಲು ಪೂರಕವಾಗುವ ಪ್ರಶ್ನೆಗಳ ಪಟ್ಟಿ.

**ಶಿಕ್ಷಕರಿಗೆ ಸೂಚನೆಗಳು:**

- ಜನಪ್ರಿಯ ಕತೆಗಳನ್ನು ಆರಿಸಿಕೊಳ್ಳಿ.
- ಪ್ರತಿಯೊಂದು ಕಥೆಯ ಪಾತ್ರಗಳು, ಕಾರಣಗಳು, ವಿವರಣೆಗಳು ಅಥವಾ ಅಂತ್ಯದಲ್ಲಿ ಬದಲಾವಣೆಗಳನ್ನು ಮಾಡಿ. ಇಲ್ಲಿ ನೀಡಿರುವ ಉದಾಹರಣೆಯಲ್ಲಿ ಕಥೆಯ ಮುಖ್ಯವಾದ ಘಟನೆಯಲ್ಲಿನ ಪಾತ್ರ ಮತ್ತು ಕಾರಣಗಳನ್ನು ಬದಲಿಸಲಾಗಿದೆ. ಕಥೆಯ ಅಂತ್ಯದಲ್ಲಿ ಯಾವುದೇ ಬದಲಾವಣೆಯನ್ನು ಮಾಡಿರುವುದಿಲ್ಲ.
- ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲಗಳಿಗೆ ಪೂರಕವಾಗುವಂತಹ ಪ್ರಶ್ನೆಗಳನ್ನು ಪಟ್ಟಿಮಾಡಿ. ಪ್ರಶ್ನೆಗಳು ಕೇವಲ ಗ್ರಹಿಕೆಯ ಮೇಲೆ ಕೇಂದ್ರೀಕರಿಸದಿರುವಂತೆ ಗಮನಹರಿಸಿ. (ಉದಾ: ಮೊಲ ಏನು ಮಾಡಿತು?)

**ಪ್ರಕ್ರಿಯೆ:**

- ವಿದ್ಯಾರ್ಥಿಗಳನ್ನು ನಾಲ್ಕು ಅಥವಾ ಐದು ಗುಂಪುಗಳಾಗಿ ವಿಂಗಡಿಸಿ.
- ಎರಡೂ ಕಥೆಗಳನ್ನು ಒಂದರ ನಂತರ ಮತ್ತೊಂದನ್ನು ಓದಿ. ಯಾವುದೇ ವಿವರಣೆ ಅಥವಾ ಚರ್ಚೆಯನ್ನು ಮಾಡದಂತೆ ಎಚ್ಚರ ವಹಿಸಿ.
- ಪ್ರಶ್ನೆಗಳನ್ನು ಓದಿ ಮತ್ತು ಪ್ರಶ್ನೆಗಳ ಸಂದರ್ಭಕ್ಕೆ ಅನುಗುಣವಾಗಿ ಕಥೆಯ ಬಗ್ಗೆ ಚರ್ಚಿಸಲು ಹೇಳಿ. ಪ್ರಶ್ನೆಗಳ ಪಟ್ಟಿಗೆ ಮಕ್ಕಳು ತಮ್ಮ ಪ್ರಶ್ನೆಗಳನ್ನು ಸೇರಿಸಲು ಅವಕಾಶವಿರಲಿ.
- ಪ್ರತಿಯೊಂದು ಗುಂಪಿಗೆ ಎರಡೂ ಕಥೆಗಳನ್ನು ನೀಡಿ. ಪ್ರತಿ ಗುಂಪಿನಲ್ಲಿ ಮಕ್ಕಳು ತಮಗೆ ನೀಡಲಾದ ಕಥೆಯನ್ನು ಮತ್ತೆ ಓದಿ ಶಿಕ್ಷಕರು ನೀಡಿರುವ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಕಥೆಗಳ ಬಗ್ಗೆ ಚರ್ಚಿಸುವಂತೆ ಹೇಳಿ.
- ಪ್ರತಿಯೊಂದು ಗುಂಪು ಇಡೀ ತರಗತಿಯ ಮುಂದೆ ಕಥೆಗಳ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಕುರಿತು ಹೇಳಲು ಅವಕಾಶ ನೀಡಿ.

**ಕಥೆ 1: ಮೊಲ ಮತ್ತು ಆಮೆ**

*(ಶಿಕ್ಷಕರು ಈ ಕಥೆಗಳನ್ನು ತರಗತಿಯ ಭಾಷೆಗೆ ಅಥವಾ ಬೇರೆ ಯಾವುದೇ ಭಾಷೆಗೆ ಅಥವಾ ಸಾಂದರ್ಭಿಕವಾಗಿ ಸೂಕ್ತವಾದ ಭಾಷೆಗಳಿಗೆ ಅನುವಾದಿಸಬಹುದು.)*

ಒಂದು ದಿನ ಒಂದು ಆಮೆ ಮರದ ಕೆಳಗೆ ವಿಶ್ರಾಂತಿ ಪಡೆಯುತ್ತಿತ್ತು. ಆಗ ಅಲ್ಲಿಗೆ ಒಂದು ಮೊಲ ಬಂದು ಆಮೆಯನ್ನು ಆಡಿಕೊಂಡಿತು. ಅದು ಆಮೆಗೆ 'ನೀನು ನಿಧಾನ ಮತ್ತು ಸೋಮಾರಿ'ಎಂದು ಹೇಳಿತು. ಆಗ ಆಮೆ ಓಟದ ಪಂದ್ಯದಲ್ಲಿ ಭಾಗವಹಿಸುವಂತೆ ಮೊಲಕ್ಕೆ ಸವಾಲು ಹಾಕಿತು. ಮೊಲ ಒಪ್ಪಿಕೊಂಡಿತು. ಓಟದ ಪಂದ್ಯ ಆರಂಭವಾಯಿತು. ಮೊಲ ಜೋರಾಗಿ ಓಡಿತು. ಆಮೆಯು ನಿಧಾನವಾಗಿ ತೆವಳುತ್ತಿತ್ತು. ಮೊಲ ವೇಗವಾಗಿ ಓಡಿ ಆಮೆಯನ್ನು ಬಹಳ ಹಿಂದೆ ಹಾಕಿತು. ಆದ್ದರಿಂದ ಒಂದು ಮರದ ಕೆಳಗೆ ಸ್ವಲ್ಪ ವಿಶ್ರಾಂತಿ ಪಡೆಯಲು ನಿಂತಿತು. ಈ ನಡುವೆ ಆಮೆಯು ನಿಧಾನವಾಗಿ ತನ್ನ ನಡುಗೆಯನ್ನು ಮುಂದುವರಿಸಿತು. ಸ್ವಲ್ಪ ಹೊತ್ತಿನಲ್ಲೇ ಮರದ ಕೆಳಗೆ ಗೊರಕೆ ಹೊಡೆಯುತ್ತಿದ್ದ ಮೊಲವನ್ನು ದಾಟಿ ಮುಂದೆ ಹೋಯಿತು. ಬಹಳ ಹೊತ್ತಿನ ನಂತರ ಮೊಲಕ್ಕೆ ಎಚ್ಚರವಾಯಿತು. ಅದು ಕೂಡಲೇ ಗುರಿಯ ಗೆರೆಯತ್ತ ವೇಗವಾಗಿ ಓಡಿತು. ಅಷ್ಟು ಹೊತ್ತಿಗೆ ಆಮೆಯು ಗುರಿ ತಲುಪಿರುವುದನ್ನು ನೋಡಿತು. ನಿಧಾನವಾಗಿಯಾದರೂ ನಿರಂತರವಾಗಿ ಕೆಲಸ ಮಾಡುವುದು ಯಶಸ್ಸನ್ನು ಸಾಧಿಸಲು ಸಹಾಯಕ ಎಂಬುದನ್ನು ಈ ಕಥೆಯು ತೋರಿಸುತ್ತದೆ.

**ಕಥೆ 2: ಆಮೆ ಮತ್ತು ಜಿಂಕೆ**

ಒಂದು ದಿನ ಒಂದು ಆಮೆ ಮರದ ಕೆಳಗೆ ವಿಶ್ರಾಂತಿ ಪಡೆಯುತ್ತಿತ್ತು. ಮೊಲದ ಜೊತೆ ನಡೆದ ಓಟದ ಪಂದ್ಯದಲ್ಲಿ ತಾನು ಗೆದ್ದೆನೆಂದು ಸಂತೋಷಪಡುತ್ತಿತ್ತು. ಆಗ ಅಲ್ಲಿ ಒಂದು ಜಿಂಕೆ ನಡೆದುಕೊಂಡು ಹೋಗುತ್ತಿತ್ತು. ಆಮೆಗೆ ತನ್ನನ್ನು ಯಾರೂ ಪಂದ್ಯದಲ್ಲಿ ಸೋಲಿಸಲು ಸಾಧ್ಯವಿಲ್ಲ ಎನಿಸಿತು. ಹಾಗಾಗಿ ಅದು ಓಟದ ಪಂದ್ಯಕ್ಕೆ ಬರುವಂತೆ ಜಿಂಕೆಗೆ ಸವಾಲು ಹಾಕಿತು. ಜಿಂಕೆ ಒಪ್ಪಿತು ಹಾಗೂ ಪಂದ್ಯಕ್ಕೆ ಸಮಯವನ್ನು ನಿಗದಿಪಡಿಸಲಾಯಿತು. ದಾರಿಯುದ್ದಕ್ಕೂ ಚಾಚಿದ್ದ ಪೊದೆಗಳು ಇಬ್ಬರ ಓಟದ ದೂರವನ್ನು ಗುರುತು ಇಟ್ಟುಕೊಳ್ಳುವುದು ಎಂದೂ ನಿರ್ಧರಿಸಲಾಯ್ತು. ಜಿಂಕೆ ತಕ್ಷಣ ಓಡಿ ಮಿಂಚಿನಂತೆ ಮರೆಯಾಯಿತು. ಜಿಂಕೆ ಓಡಿದ ವೇಗವನ್ನು ನೋಡಿ ಆಮೆಗೆ ಭಯವಾಯಿತು. ತಾನು ನಿಜಕ್ಕೂ ಪಂದ್ಯದಲ್ಲಿ ಗೆಲ್ಲುವುದು ಸಾಧ್ಯವೇ ಎಂಬ ಅನುಮಾನ ಕಾಡಿತು. ಅದು ತಕ್ಷಣವೇ ಉಪಾಯವೊಂದನ್ನು ಯೋಚಿಸಿತು. ಅದು ತನ್ನ ಸೋದರ ಸಂಬಂಧಿಗಳನ್ನೆಲ್ಲ ಕರೆದು ದಾರಿಯ ಉದ್ದಕ್ಕೂ ಇರುವ ಪೊದೆಯ ಹಿಂದೆ ಅಡಗಿಕುಳಿತುಕೊಳ್ಳುವಂತೆ ಹೇಳಿತು. ಪಂದ್ಯ ಆರಂಭವಾಯಿತು. ಜಿಂಕೆ ಓಡಲಾರಂಭಿಸಿತು. ಆಮೆ ನಿಧಾನವಾಗಿ ತೆವಳಲು ಆರಂಭಿಸಿತು. ಪ್ರತಿಬಾರಿ ಜಿಂಕೆ ದಾರಿ ಬದಿಯ ಪೊದೆ ತಲುಪಿದ ತಕ್ಷಣ, "ನೀನು ಬಂದಿರುವೆಯಾ?" ಎಂದು ಕೂಗಿ ಕೇಳಿತು. ಆಗ ಪೊದೆಯ ಹಿಂದೆ ಅಡಗಿದ್ದ ಆಮೆಯ ಸೋದರ ಸಂಬಂಧಿ "ಹೌದು" ಎಂದು ಕೂಗಿತು. ಜಿಂಕೆ ಮತ್ತಷ್ಟು ವೇಗವಾಗಿ ಓಡಿತು. ಅದು ಕೊನೆಯ ಪೊದೆಯನ್ನು

ತಲುಪಿತು. ಅಷ್ಟು ಹೊತ್ತಿಗಾಗಲೇ ಆಮೆಯ ಸೋದರ ಸಂಬಂಧಿಯೊಂದು ಅಲ್ಲಿತ್ತು. ಅದನ್ನು ಪಂದ್ಯಕ್ಕೆ ಬರುವಂತೆ ಸವಾಲು ಹಾಕಿದ ಆಮೆಯೇ ಎಂದುಕೊಂಡ ಜಿಂಕೆ ತಾನು ಪಂದ್ಯದಲ್ಲಿ ಸೋತಿರುವುದಾಗಿ ಘೋಷಿಸಿತು. ಒಂದು ತಂಡವಾಗಿ ಒಟ್ಟಿಗೆ ಕೆಲಸ ಮಾಡುವುದರಿಂದ ಸುಲಭವಾಗಿ ಯಶಸ್ಸುಗಳಿಸಲು ಸಾಧ್ಯ ಎಂಬುದನ್ನು ಈ ಕಥೆ ತೋರಿಸುತ್ತದೆ.

ಈ ಕೆಳಗಿನ ಅಂಶಗಳನ್ನು ಆಧರಿಸಿ ಕಥೆಗಳನ್ನು ಹೋಲಿಸಿ:

1. ಕಥೆಯಲ್ಲಿನ ಪಾತ್ರಗಳು.
2. ಪಂದ್ಯವನ್ನು ಕೈಗೊಳ್ಳಲು ಕಾರಣ.
3. ಆಮೆ ಹೇಗೆ ಗೆಲುವನ್ನು ಸಾಧಿಸಿತು?
4. ಕಥೆಯ ನೀತಿ ಏನು?
5. ನೀವು ಕೇಳಲು ಬಯಸುವ ಇತರ ಯಾವುದೇ ಪ್ರಶ್ನೆಗಳು.

**ಚಟುವಟಿಕೆ 3**

**ಉದ್ದೇಶ:** ಒಂದೇ ಉತ್ಪನ್ನವನ್ನು ಮಾರುವ ಎರಡು ಜಾಹೀರಾತುಗಳ ನಡುವಿನ ಸಾಮ್ಯತೆಗಳನ್ನು ಮತ್ತು ವ್ಯತ್ಯಾಸಗಳನ್ನು ಗುರುತಿಸುವುದು.

ಈ ಚಟುವಟಿಕೆಯನ್ನು 7-8 ನೇ ತರಗತಿಗಳಿಗೆ ಬಳಸಬಹುದಾಗಿದೆ.

**ಬೋಧನಾ ಸಂಪನ್ಮೂಲಗಳು:**

- ಒಂದೇ ಉದ್ದೇಶಕ್ಕಾಗಿ ತಯಾರಿಸಲಾದ ಎರಡು ಜಾಹೀರಾತುಗಳು.
- ನಿರ್ದಿಷ್ಟ ಅಂಶಗಳ ಕಡೆಗೆ ವಿದ್ಯಾರ್ಥಿಗಳ ಗಮನವನ್ನು ಸೆಳೆಯಲು ಪೂರಕವಾದ ನಮೂನೆ ಅಥವಾ ಅಭ್ಯಾಸ ಹಾಳೆ (ಉದಾಹರಣೆ ನೋಡಿ.)

**ಸಮಯ:** ಅಂದಾಜು ಒಂದು ಗಂಟೆ.

**ಪ್ರಕ್ರಿಯೆ:**

- ಪ್ರತಿ ವಿದ್ಯಾರ್ಥಿಗೂ ಒಂದೊಂದು ಪಠ್ಯವನ್ನು ನೀಡಿ, ಅವರು ಪಠ್ಯದ ವಿವರಗಳನ್ನು ಪರಿಚಯಿಸಿಕೊಳ್ಳುವಂತೆ ಸೂಚಿಸುವುದು. (ಬಹುಶಃ ಇದನ್ನು ಹಿಂದಿನ ದಿವಸವೇ ಮಕ್ಕಳಿಗೆ ಗೃಹಪಾಠದ ಕಾರ್ಯವಾಗಿ ನೀಡಬಹುದು.)
- ತರಗತಿಯನ್ನು ನಾಲ್ಕು ಅಥಾ ಐದು ಗುಂಪುಗಳಾಗಿ ವಿಂಗಡಿಸಿ. ವಿದ್ಯಾರ್ಥಿಗಳು ತಮ್ಮ ಗುಂಪಿಗೆ ನೀಡಲಾಗಿರುವ ಪ್ರಶ್ನೆಗಳನ್ನು ತಮ್ಮಲ್ಲಿಯೇ ಚರ್ಚಿಸಲು ಹೇಳಿ.

ಮಕ್ಕಳಿಗೆ ನೀಡಲಾಗುವ ಪ್ರಶ್ನೆಗಳು ಈ ಕೆಳಗಿನಂತೆ ಇರಬಹುದು.

1. ಉತ್ಪನ್ನದ ಹೆಸರು ಏನು?
2. ನಿರೂಪಕ / ಬರಹಗಾರನ ವೃತ್ತಿ ಏನು? ಅದು ನಿಮಗೆ ಹೇಗೆ ಗೊತ್ತು?
3. ಯಾರ ಅನುಭವವನ್ನು ಕುರಿತು ನಿರೂಪಕ / ಬರಹಗಾರರು ಮಾತನಾಡಿದ್ದಾರೆ? ಅದು ನಿಮಗೆ ಹೇಗೆ ಗೊತ್ತು?
4. ಟೂಥ್‌ಪೇಸ್ಟ್ ನ ಕೆಲಸವನ್ನು ಹೇಗೆ ವಿವರಿಸಲಾಗಿದೆ? ಮುಖ್ಯವಾದ ಪದಗಳಿಗೆ ಅಡಿಗೆರೆ ಹಾಕಿರಿ.
5. ಉತ್ಪನ್ನದ ವರ್ಣನೆಗೆ ಬಳಸಿರುವ ಪ್ರಮುಖ ಪದಗುಚ್ಛಗಳು ಯಾವುವು?
6. ಜಾಹೀರಾತಿನಲ್ಲಿ ಹೇಳಿರುವಂತೆ ಉತ್ಪನ್ನವನ್ನು ಬಳಸುವುದರಿಂದ ಆಗುವ ಪರಿಣಾಮಗಳೇನು?

ತಮ್ಮ ಗುಂಪಿನಲ್ಲಿ ಚರ್ಚಿಸಿದ ನಂತರ ವಿದ್ಯಾರ್ಥಿಗಳು ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಕುರಿತು ಕೋಷ್ಟಕ ಅಥವಾ ವೆನ್ ನಕ್ಷೆಯಲ್ಲಿ ದಾಖಲಿಸುವರು. (ಚಿತ್ರ ೧ ರಲ್ಲಿ ತೋರಿಸಿರುವಂತೆ)

**ಸಾಮ್ಯತೆಗಳು**

**ಪಠ್ಯ 1** **ಪಠ್ಯ 2**

*ಚಿತ್ರ 1: ಎರಡು ಪಠ್ಯಗಳ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸಗಳು*

ಪ್ರತಿಯೊಂದು ಗುಂಪು ತಾವು ದಾಖಲಿಸಿರುವ ಎರಡು ಜಾಹೀರಾತುಗಳ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಇಡೀ ತರಗತಿಯ ಮುಂದೆ ಪ್ರಸ್ತುತ ಪಡಿಸುವರು. ಆ ನಂತರ ಎರಡೂ ಜಾಹೀರಾತುಗಳಲ್ಲಿರುವ ಸಾಮ್ಯತೆಗಳ ಉದ್ದೇಶ ಹಾಗೂ ತಮ್ಮ ಉದ್ದೇಶವನ್ನು ಸಾಧಿಸಲು ಒಳಗೊಂಡಿರುವ ವ್ಯತ್ಯಾಸಗಳಿಗೆ ಒತ್ತು ನೀಡಿ ಶಿಕ್ಷಕರು ಮಾಹಿತಿಯನ್ನು ಕ್ರೋಢೀಕರಿಸುವರು. ಇದರ ಜೊತೆಗೆ ಹಲ್ಲಿನ ಸಂವೇದನಾಶೀಲತೆಯಿಂದ ರಕ್ಷಿಸುವ ಎರಡು ಟೂಥ್‌ಪೇಸ್ಟ್‌ಗಳಲ್ಲಿ ಇರುವ ವ್ಯತ್ಯಾಸಗಳ ಕುರಿತಾಗಿಯೂ ಶಿಕ್ಷಕರು ಚರ್ಚಿಸುವರು. ಚರ್ಚೆಯಲ್ಲಿ ಜಾಹೀರಾತುಗಳ ವಿಷಯ ಮತ್ತು ಭಾಷೆ ಎರಡರ ಮೇಲೂ ಗಮನ ಹರಿಸಲಾಗುವುದು. ಎರಡೂ ಜಾಹೀರಾತುಗಳಲ್ಲಿ ತಜ್ಞ ದಂತವೈದ್ಯರನ್ನೇ ಪಾತ್ರವಾಗಿ ಬಳಸಲು ಇರುವ ಕಾರಣಗಳನ್ನು ಕುರಿತು ಸಹ ಶಿಕ್ಷಕರು ಸಂಕ್ಷಿಪ್ತವಾಗಿ ವಿವರಿಸಬಹುದು. ಅಲ್ಲದೆ ಜಾಹೀರಾತಿನಲ್ಲಿ ಸಂದೇಶವನ್ನು ತಲುಪಿಸಲು ಪ್ರಥಮ ವ್ಯಕ್ತಿ ಮತ್ತು ತೃತೀಯ ವ್ಯಕ್ತಿ ವಿವರಣಾ ತಂತ್ರವನ್ನು ಬಳಸಿರುವುದರ ಪರಿಣಾಮ, ಸಂದೇಶಕ್ಕೆ ಒತ್ತು ನೀಡಲು ಬಳಸಿರುವ ಮುಖ್ಯ ಪದಗುಚ್ಛಗಳು, ಮತ್ತಿತರ ಪ್ರಮುಖ ಅಂಶಗಳ ಪಾತ್ರವನ್ನು ಕುರಿತಾಗಿಯೂ ಚರ್ಚಿಸಬಹುದು.

***(ಶಿಕ್ಷಕರು ಜಾಹೀರಾತುಗಳಲ್ಲಿನ ಪಠ್ಯವನ್ನು ಮಕ್ಕಳ ತರಗತಿಯ ಭಾಷೆಗೆ ಅಥವಾ ಸನ್ನಿವೇಶಕ್ಕೆ ಅನುಗುಣವಾಗಿ ಅಗತ್ಯವಾದ ಬೇರೆ ಯಾವುದೇ ಭಾಷೆಗೆ ಅನುವಾದಿಸಬಹುದು.)***

**ಪಠ್ಯ 1**

ನೀವು ಆರಾಮವಾಗಿ ಐಸ್‌ಕ್ರೀಂ ಅನ್ನು ತಿನ್ನಬಲ್ಲಿರಾ? ತಂಪು ಪಾನೀಯವನ್ನು ಕುಡಿಯಬಲ್ಲಿರಾ? ಇಲ್ಲ, ಅಲ್ಲವೇ? ಇದು ಹಲ್ಲುಗಳ ಸಂವೇದನಾಶೀಲತೆಯ ಕಾರಣದಿಂದ ಇರಬಹುದು. ನೀವು ನಿಮ್ಮ ಟೂಥ್‌ಪೇಸ್ಟ್ ಅನ್ನು ಬದಲಿಸಿ ನೋಡಿ. ನಾವು ನಿಮಗಾಗಿ **ನಂಬರ್ ಒನ್** ಟೂಥ್‌ಪೇಸ್ಟ್ ಅನ್ನು ತಂದಿದ್ದೇವೆ. ಇದು ನಿಮ್ಮ ಹಲ್ಲುಗಳ ಆಳಕ್ಕೆ ಹೋಗಿ ಅವುಗಳನ್ನು ಸದೃಢಗೊಳಿಸುತ್ತವೆ. **ನಂಬರ್ ಒನ್** ಅನ್ನು ಬಳಸಲು ಆರಂಭಿಸಿದ ಕೆಲವೇ ದಿನಗಳಲ್ಲಿ ನೀವು ಏನನ್ನಾದರೂ ತಿನ್ನಬಹುದು. “ಈಗ ನಾವು ನಮಗೆ ಇಷ್ಟವಾದ ಯಾವುದೇ ತಿನಿಸನ್ನು ಆರಾಮವಾಗಿ ತಿನ್ನಬಲ್ಲೆವು” ಎಂದು ಜನ ಹೇಳುತ್ತಿದ್ದಾರೆ. ಇದು **ನಂಬರ್ ಒನ್** ಕಾರಣದಿಂದ ಸಾಧ್ಯವಾಗಿದೆ.

**ಪಠ್ಯ 2**

ನಾನೊಬ್ಬ ಡಾಕ್ಟರ್. ಆದರೆ ನನಗೂ ಬಿಸಿಯಾದ ಮತ್ತು ತಂಪಾದ ತಿನಿಸನ್ನು ತಿನ್ನಲು ಭಯವಾಗುತ್ತದೆ. ನನ್ನ ಸ್ನೇಹಿತರೊಬ್ಬರು **ನಂಬರ್ ಟೆನ್** ಟೂಥ್‌ಪೇಸ್ಟ್ ಅನ್ನು ಬಳಸಿನೋಡುವಂತೆ ಹೇಳಿದರು. ವಸಡುಗಳು ಸಡಿಲಗೊಂಡಾಗ ಹಲ್ಲುಗಳು ಸಂವೇದನಾಶೀಲವಾಗುತ್ತವೆ. **ನಂಬರ್ ಟೆನ್** ಹಲ್ಲುಗಳ ಮೇಲೆ ಸುರಕ್ಷಾ ಕವಚದ ಹಾಗೆ ಕಾರ್ಯನಿರ್ವಹಿಸುತ್ತದೆ. ನನ್ನ ಆಯ್ಕೆ **ನಂಬರ್ ಟೆನ್** ನೀವೂ ಬಳಸಿ **ನಂಬರ್ ಟೆನ್.**

**ಲೇಖಕಿ ದೇವಕಿ ಲಕ್ಷ್ಮೀನಾರಾಯಣ್**ರವರು ಅಜೀಂ ಪ್ರೇಮ್ ಜಿ ವಿಶ್ವವಿದ್ಯಾಲಯದ ಸಂಶೋಧನಾ ಕೇಂದ್ರದ ಮುಖ್ಯಸ್ಥರಾಗಿದ್ದಾರೆ. ಫೌಂಡೇಶನ್ ಅನ್ನು ಸೇರುವ ಮೊದಲು ಇವರು ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೆಜಸ್, ಮೈಸೂರು ಇಲ್ಲಿ ಇಪ್ಪತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಇವರು ಮೈಸೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಹಾಗೂ ನೆದರ್ಲ್ಯಾಂಡ್‌ನ ಗ್ರೋನಿಂಗೆನ್ ವಿಶ್ವವಿದ್ಯಾಲಯದಿಂದ ಭಾಷಾಶಾಸ್ತ್ರದಲ್ಲಿ ಸ್ನಾತಕ ಪದವಿಯನ್ನು ಪಡೆದಿದ್ದಾರೆ. ***devaki@azimpremjifoundation.org***

**ವ್ಯಾಕರಣ ಚಟುವಟಿಕೆಗಳು**

**ಚಟುವಟಿಕೆ 1: ವ್ಯತ್ಯಾಸಗಳನ್ನು ಗುರುತಿಸಿ.**

**ಉದ್ದೇಶಗಳು:**

1. ವಿದ್ಯಾರ್ಥಿಗಳಲ್ಲಿ ಪೂರ್ಣ ವರ್ತಮಾನ ಕಾಲದ ಬಳಕೆಯ ಅರಿವನ್ನು ಬೆಳೆಸುವುದು.
2. ತರಗತಿಯಲ್ಲಿ ಮಾತನಾಡಲು ಉತ್ತೇಜಿಸುವುದು.

**ಸಂಪನ್ಮೂಲಗಳು:**

1. ಸಾಮ್ಯತೆ ಹೊಂದಿರುವ ಹಲವು ಜೋಡಿಚಿತ್ರಗಳು, ಬೇರೆ ಬೇರೆ ಸಮಯದಲ್ಲಿ ಬಿಡಿಸಿದ ಒಂದೇ ಸ್ಥಳದ ನಕಾಶೆಗಳು. ಇವು ಕಾಲಾಂತರದಲ್ಲಿ ಆಗಿರುವ ಬದಲಾವಣೆಗಳನ್ನು ಸ್ಪಷ್ಟವಾಗಿ ಗುರುತಿಸಲು ಸಹಾಯಕ.

**ವ್ಯಾಪ್ತಿ:** ಹಿರಿಯ ಪ್ರಾಥಮಿಕ ತರಗತಿಗಳು

**ವಿಧಾನ:**

1. ಬೇರೆ ಬೇರೆ ಸಂದರ್ಭಗಳಲ್ಲಿ ತೆಗೆಯಲಾಗಿರುವ ಒಂದೇ ಸ್ಥಳದ ಎರಡು ಚಿತ್ರಗಳು ಅಥವಾ ನಕಾಶೆಗಳನ್ನು ವಿದ್ಯಾರ್ಥಿಗಳಿಗೆ ನೀಡಿ.
2. ಚಿತ್ರಗಳನ್ನು ಅಥವಾ ನಕಾಶೆಯನ್ನು ಆಧರಿಸಿ ಕಾಲಾನಂತರದಲ್ಲಿ ಆಗಿರುವ ಬದಲಾವಣೆಗಳನ್ನು ಕುರಿತು ಮಾತನಾಡುವಂತೆ ವಿದ್ಯಾರ್ಥಿಗಳಿಗೆ ಸೂಚಿಸಿ.
3. ಉದಾಹರಣೆಯೊಂದನ್ನು ನೀಡಿ ನಂತರ ಮಕ್ಕಳು ಮಾತನಾಡುವಾಗ ಅವರ ಹೇಳಿಕೆಗಳನ್ನು ಆರಿಸಿ ಅಗತ್ಯವಿದ್ದಲ್ಲಿ ತಿದ್ದಿರಿ.

ಉದಾಹರಣೆಗೆ:

- ಗೋಡೆ ಗಡಿಯಾರವನ್ನು ಬದಲಾಯಿಸಲಾಗಿದೆ.
- ಕೊಠಡಿಯನ್ನು ವರ್ಣಚಿತ್ರದಿಂದ ಅಲಂಕರಿಸಲಾಗಿದೆ.

4. ಮಕ್ಕಳ ತಪ್ಪುಗಳನ್ನು ಒಂದೇ ಬಾರಿಗೆ ಹೆಚ್ಚು ಬಾರಿ ತಿದ್ದುವುದು ಮಕ್ಕಳ ಆತ್ಮವಿಶ್ವಾಸವನ್ನು ಕುಗ್ಗಿಸಬಹುದು ಎಂಬುದನ್ನು ಶಿಕ್ಷಕರು ಗಮನಿಸುವುದು.

**ಚಟುವಟಿಕೆ 2: ಬನ್ನಿ ಕಲ್ಪನೆಯಲ್ಲಿ ಕಳೆದುಹೋಗೋಣ!**

**ಉದ್ದೇಶಗಳು:**

1. ಇಂಗ್ಲಿಷ್ ನಲ್ಲಿ ಮಾತನಾಡುವಂತೆ ಮಕ್ಕಳನ್ನು ಉತ್ತೇಜಿಸುವುದು.
2. ನೀಡಲಾಗಿರುವ ವಿನ್ಯಾಸವನ್ನು ಬಳಸಿ ವಾಕ್ಯಗಳನ್ನು ರಚಿಸುವುದು.

**ಸಂಪನ್ಮೂಲಗಳು**

ಕಥೆಯ ಹಾಗೆ ಕಲ್ಪನಾತ್ಮಕವಾದ ಹಲವು ಸಂದರ್ಭಗಳನ್ನು ಮನಸ್ಸಿನಲ್ಲಿಯೇ ಪಟ್ಟಿಮಾಡಿಕೊಳ್ಳಿ ಅಥವಾ ದಿನಚರಿಯಲ್ಲಿ ಪಟ್ಟಿಮಾಡಿಕೊಳ್ಳುವುದು ಉತ್ತಮ.

**ವ್ಯಾಪ್ತಿ:** ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ತರಗತಿಗಳು

**ವಿಧಾನ**

1. ಮಕ್ಕಳಿಗೆ ಕಥೆಯ ರೀತಿ ಕಲ್ಪನಾತ್ಮಕವಾದ ಸನ್ನಿವೇಶವನ್ನು ಕೊಟ್ಟು, ಆ ಸನ್ನಿವೇಶವನ್ನು ಕಲ್ಪಿಸಿಕೊಂಡು ನಿಮ್ಮ ಪ್ರಶ್ನೆಗಳಿಗೆ ಪ್ರತಿಕ್ರಿಯೆಯಾಗಿ ವಿವರಿಸುವಂತೆ ಹೇಳಿ.

ಉದಾಹರಣೆಗೆ ಕೆಳಗಿನ ಸನ್ನಿವೇಶಗಳನ್ನು ಗಮನಿಸಿ.

ಶಾಹೀನ್‌ಳ ಪೋಷಕರು ಎರಡು ದಿನ ಪಟ್ಟಣಕ್ಕೆ ಹೋದರು. ಶಾಹೀನ್ ಮತ್ತು ಅವಳ ಸೋದರಿಯನ್ನು ಮನೆಯಲ್ಲಿಯೇ ಬಿಟ್ಟುಹೋಗಿದ್ದರು. ಅವರಿಬ್ಬರೂ ಮನೆಯಲ್ಲಿ ಮಾಡಿದ ಅಥವಾ ಮಾಡದಿರುವ ಯಾವುದಾದರೂ ಆರು ಕೆಲಸಗಳನ್ನು ಪಟ್ಟಿಮಾಡಿ.

- ಅವರು ಬಹಳ ಹೊತ್ತಿನವರೆಗೂ ದೂರದರ್ಶನವನ್ನು ನೋಡಿದರು.

ಅದರಿಂದ ಏನಾಯಿತು?

- ಅದರಿಂದ ಅವರು ಮರುದಿನ ಶಾಲೆಗೆ ಹೋಗುವುದು ತಡವಾಯಿತು.

ಹಿಂತಿರುಗಿ ಬಂದಮೇಲೆ ಪೋಷಕರು ಮಕ್ಕಳಿಗೆ ಏನು ಹೇಳಿದರು?

- ರಾತ್ರಿ ಬಹಳ ಹೊತ್ತಿನವರೆಗೂ ದೂರದರ್ಶನ ನೋಡಬಾರದಿತ್ತು ಎಂದು ಹೇಳಿದರು.

2. ಈ ಚಟುವಟಿಕೆಯ ಮೂಲಕ ಹಲವು ವ್ಯಾಕರಣ ವಿಭಾಗಗಳನ್ನು ಮಕ್ಕಳಿಗೆ ಒಟ್ಟಿಗೆ ಏಕಕಾಲದಲ್ಲಿ ಪರಿಚಯಿಸಬಹುದಾಗಿದೆ. (ಉದಾ: ಕಥೆಯಲ್ಲಿನ ಕ್ರಿಯಾಪದ, ಭೂತಕಾಲ, ಇತ್ಯಾದಿ.)

**ಚಟುವಟಿಕೆ 3: ಪಠ್ಯವನ್ನು ಕ್ರಮದಲ್ಲಿ ಜೋಡಿಸಿ**.

**ಉದ್ದೇಶಗಳು:**

3. ಪಠ್ಯವನ್ನು ಸಮಗ್ರವಾಗಿ ಗ್ರಹಿಸಲು ಉತ್ತೇಜಿಸುವುದು.
4. ನೀಡಲಾದ ವಾಕ್ಯಗಳನ್ನು ಬಳಸಿ ಅರ್ಥಪೂರ್ಣವಾದ ಪ್ಯಾರಾವನ್ನು ರಚಿಸುವುದು.

**ಪರಿಕರಗಳು**

ವಯಸ್ಸಿಗನುಗುಣವಾದ ಮುದ್ರಿತ ರೂಪದ ಪಠ್ಯಗಳು

**ವ್ಯಾಪ್ತಿ:** ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ

**ವಿಧಾನ:**

1. ಸರಿಯಾದ ಕ್ರಮದಲ್ಲಿ ಇರದ ಒಂದೇ ವಾಕ್ಯವೃಂದದ ವಾಕ್ಯಗಳನ್ನು ಮಕ್ಕಳಿಗೆ ನೀಡುವುದು.

2. ಪ್ರತಿಯೊಂದು ವಾಕ್ಯವನ್ನು ಓದಿ ಅದರ ಅರ್ಥವನ್ನು ಗ್ರಹಿಸಲು ಸೂಚಿಸಿ, ವಾಕ್ಯಗಳನ್ನು ಸರಿಯಾದ ಕ್ರಮದಲ್ಲಿ ಜೋಡಿಸುವಂತೆ ಹೇಳಿ. ಈ ಚಟುವಟಿಕೆಗೆ ಮಕ್ಕಳು ತಾವು ಇತ್ತೀಚೆಗೆ ಓದಿದ ಪಠ್ಯವನ್ನು ಬಳಸುವುದು ಸೂಕ್ತ. ಪುಟ್ಟ ವಯಸ್ಸಿನ ಮಕ್ಕಳಿಗೆ ಅವರು ಸುಲಭವಾಗಿ ಗ್ರಹಿಸಲು ಸಾಧ್ಯವಾಗುವಂತೆ ಕಥೆಗಳನ್ನು ಆರಿಸುವುದು ಮತ್ತು ಹಿರಿಯ ಪ್ರಾಥಮಿಕ ತರಗತಿಗೆ ವಿವರಣಾತ್ಮಕವಾದ ಪಠ್ಯಗಳನ್ನು ಬಳಸಬಹುದು.

ಆ ರೀತಿಯ ಪಠ್ಯವೊಂದರ ಉದಾಹರಣೆಯನ್ನು ಈ ಕೆಳಗೆ ನೀಡಲಾಗಿದೆ.

**ಕಿರಿಯ ಕಲಿಕಾರ್ಥಿಗಳಿಗೆ ಕ್ರಮತಪ್ಪಿದ ವಾಕ್ಯಗಳ ಪಠ್ಯ**

ಒಮ್ಮೆ ಇಪ್ಪತ್ತೈದು ಜನ ತವರದ ಆಟಿಕೆ ಸಿಪಾಯಿಗಳಿದ್ದರು. ಅವರೆಲ್ಲರನ್ನೂ ಹಳೆಯ ತವರದ ಚಮಚದಿಂದ ಮಾಡಲಾಗಿತ್ತು. ಹಾಗಾಗಿ ಅವರೆಲ್ಲರೂ  ಸೋದರರು. ಜಗತ್ತಿನಲ್ಲಿ ಅವರು ಮೊಟ್ಟಮೊದಲು ಕೇಳಿದ ಪದಗಳೆಂದರೆ, "ತವರದ ಸಿಪಾಯಿಗಳು!" ಎಂದು ಹೇಳಿದ ಮಗುವೊಂದರ ಮಾತು. ತವರದ ಸಿಪಾಯಿಗಳಿರುವ ಡಬ್ಬದ ಮುಚ್ಚಳ ತೆಗೆದ ತಕ್ಷಣ ಮಗುವು ಚಪ್ಪಾಳೆ ತಟ್ಟುತ್ತ ತಟ್ಟುತ್ತಾ ತನ್ನ ಸಂತೋಷವನ್ನು ವ್ಯಕ್ತಪಡಿಸಿತು.

ಅವರೆಲ್ಲರೂ ಬಗಲಲ್ಲಿ ಬಂದೂಕು ಹಾಕಿಕೊಂಡು, ನೇರವಾಗಿ ಮುಂದೆ ನೋಡುತ್ತಿದ್ದರು ಹಾಗೂ ಅವರೆಲ್ಲರೂ ಭವ್ಯವಾದ ಕೆಂಪು ಮತ್ತು ನೀಲಿಯ ಸಮವಸ್ತ್ರವನ್ನು ಧರಿಸಿದ್ದರು. ಎಲ್ಲ ಸಿಪಾಯಿಗಳೂ ಒಂದೇ ರೀತಿ ಇದ್ದರು, ಒಬ್ಬನನ್ನು ಹೊರತುಪಡಿಸಿ; ಅವನಿಗೆ ಒಂದೇ ಒಂದು ಕಾಲಿತ್ತು; ಅವನನ್ನು ಕೊನೆಯಲ್ಲಿ ನಿಲ್ಲಿಸಲಾಗಿತ್ತು; ಅವನನ್ನು ಪೂರ್ಣಗೊಳಿಸಲು ಕಾಯಿಸಿದ ತವರ ಸಾಕಷ್ಟು ಇರಲಿಲ್ಲ, ಹಾಗಾಗಿ ಅವನನ್ನು ಭದ್ರವಾಗಿ ಒಂದು ಕಾಲಿನ ಮೇಲೆ ನಿಲ್ಲಿಸಿದ್ದರು; ಇದು ಅವನನ್ನು ಇತರರಿಗಿಂತ ವಿಭಿನ್ನವಾಗಿಸಿತ್ತು.

ಅವುಗಳನ್ನು ಅವನಿಗೆ ಹುಟ್ಟುಹಬ್ಬದ ಉಡುಗೊರೆಯಾಗಿ ನೀಡಲಾಗಿತ್ತು, ಅವನು ಅವುಗಳನ್ನು ಮೇಜಿನ ಮೇಲೆ ನಿಲ್ಲಿಸಿದನು.

**ಪಠ್ಯದ ಸರಿಯಾದ ರೂಪ**

ಅಲ್ಲಿ ಇಪ್ಪತ್ತೈದು ಜನ ತವರದ ಆಟಿಕೆ ಸಿಪಾಯಿಗಳಿದ್ದರು. ಅವರೆಲ್ಲರನ್ನೂ ಹಳೆಯ ತವರದ ಚಮಚದಿಂದ ಮಾಡಲಾಗಿತ್ತು. ಹಾಗಾಗಿ ಅವರೆಲ್ಲರೂ ಸೋದರರು. ಜಗತ್ತಿನಲ್ಲಿ ಅವರು ಮೊಟ್ಟಮೊದಲು ಕೇಳಿದ ಪದಗಳೆಂದರೆ, "ತವರದ ಸಿಪಾಯಿಗಳು!" ಎಂದು ಹೇಳಿದ ಮಗುವೊಂದರ ಮಾತು, ತವರದ ಸಿಪಾಯಿಗಳಿದ್ದ ಡಬ್ಬದ ಮುಚ್ಚಳ ತೆಗೆದ ತಕ್ಷಣ ಆ ಮಗು ತನ್ನ ಕೈಗಳಿಂದ ಚಪ್ಪಾಳೆ ತಟ್ಟುತ್ತಾ ತನ್ನ

ಸಂತೋಷವನ್ನು ವ್ಯಕ್ತಪಡಿಸಿತು. ಅವುಗಳನ್ನು ಆ ಮಗುವಿಗೆ ಹುಟ್ಟುಹಬ್ಬದ ಉಡುಗೊರೆಯಾಗಿ ನೀಡಲಾಗಿತ್ತು, ಅವನು ಅವುಗಳನ್ನು ಮೇಜಿನ ಮೇಲೆ ನಿಲ್ಲಿಸಿದನು.

ಅವರೆಲ್ಲರೂ ಬಗಲಲ್ಲಿ ಬಂದೂಕು ಹಾಕಿಕೊಂಡು, ನೇರವಾಗಿ ಮುಂದೆ ನೋಡುತ್ತಿದ್ದರು ಹಾಗೂ ಅವರೆಲ್ಲರೂ ಭವ್ಯವಾದ ಕೆಂಪು ಮತ್ತು ನೀಲಿಯ ಸಮವಸ್ತ್ರವನ್ನು ಧರಿಸಿದ್ದರು. ಒಬ್ಬನನ್ನು ಹೊರತುಪಡಿಸಿ ಎಲ್ಲ ಸಿಪಾಯಿಗಳೂ ಒಂದೇ ರೀತಿ ಇದ್ದರು; ಅವನಿಗೆ ಒಂದೇ ಒಂದು ಕಾಲಿತ್ತು; ಅವನನ್ನು ಕೊನೆಯಲ್ಲಿ ನಿಲ್ಲಿಸಲಾಗಿತ್ತು; ಅವನನ್ನು ಪೂರ್ಣಗೊಳಿಸಲು ಕಾಯಿಸಿದ ತವರ ಸಾಕಷ್ಟು ಇರಲಿಲ್ಲ, ಹಾಗಾಗಿ ಅವನನ್ನು ಭದ್ರವಾಗಿ ಒಂದು ಕಾಲಿನ ಮೇಲೆ ನಿಲ್ಲಿಸಿದ್ದರು; ಇದು ಅವನನ್ನು ಇತರರಿಗಿಂತ ವಿಭಿನ್ನವಾಗಿಸಿತ್ತು.

**ಹಿರಿಯ ವಿದ್ಯಾರ್ಥಿಗಳಿಗೆ ಕ್ರಮತಪ್ಪಿದ ವಾಕ್ಯಗಳ ಪಠ್ಯ**

ಶ್ರೀಮತಿ ಲೈಮನ್‌ರವರು ಮಾಡಿದ್ದ ಹುಲ್ಲಿನ ಚಾಪೆಯನ್ನು ಹಾಕಿಕೊಂಡು ಜಿಪ್ ಪಂಜರದ ಒಂದು ಬದಿಯಲ್ಲಿ ಕುಳಿತು ದಬ್ಬೆಯ ಬಾಗಿಲನ್ನು ಎಳೆದು ಮುಚ್ಚಿದನು.

ಮೂಲೆಯಲ್ಲಿ ಒಂದು ಮೂತ್ರದ ಗಡಿಗೆ ಇತ್ತು.

ಪಂಜರದಲ್ಲಿ ವಾಸಿಸುವುದು ಹೇಗೆನಿಸುತ್ತದೆ ಎಂದು ಅವನು ತಿಳಿಯಲು ಇಚ್ಛಿಸಿದ.

ಹೊಸದಾಗಿ ಕತ್ತರಿಸಿದ್ದ ಮರದ ವಾಸನೆಯನ್ನು ಎಳೆದುಕೊಳ್ಳುತ್ತಾ ಅವನು ಸುತ್ತಲೂ ನೋಡಿದ.

ಅದು ಸ್ವಚ್ಛವಾಗಿ, ಉತ್ತಮವಾಗಿ ಮತ್ತು ಆರಾಮದಾಯಕವಾಗಿ ಇರುವಂತೆ ಅನಿಸಿತು.

ಗೊರಕೆ ಹೊಡೆಯುವ ಮುದುಕರಿಂದ ಮತ್ತು ಶೆಲ್ಡನ್‌ನ ಒದ್ದಾಟ ಹಾಗೂ ನಿರಂತರವಾದ ನಿದ್ದೆಯಲ್ಲಿನ ಮಾತುಗಳಿಂದ ದೂರದಲ್ಲಿ ತನ್ನದೇ ಆದ ಇಂತಹುದೇ ಒಂದು ಸ್ಥಳವನ್ನು ಹೊಂದಿರುವುದು ಚೆನ್ನಾಗಿರುತ್ತದೆ ಎಂದು ಅವನಿಗೆ ಅನಿಸಿತು.

ಅವನು ಮತ್ತು ಶೆಲ್ಡನ್ ಅದರಿಂದ ಒಂದು ಉತ್ತಮ ಕೆಲಸವನ್ನು ಮಾಡಿದ್ದರು.

ಸದ್ಯ, ಕನಿಷ್ಟ ಅವನಿಗೆ ತನ್ನದೇ ಆದ ಮಂಚವಾದರೂ ಇತ್ತು.

ಅದಕ್ಕೆ ಅವನು ಚಿಕ್ಕ ಕಂಡಿಬಾಗಿಲನ್ನು ಮಾಡಿದ್ದ. ಮುಖ್ಯದ್ವಾರದ ಚಿಲಕವನ್ನು ತೆಗೆಯದೆಯೇ ಅದನ್ನು ತೆಗೆದು ಖಾಲಿ ಮಾಡಬಹುದಾಗಿತ್ತು ಹಾಗೂ ಆಹಾರವನ್ನು ಒಳಕ್ಕೆ ನೀಡಬಹುದಾಗಿತ್ತು.

ಮೊದಲು ಅವನು ಶೆಲ್ಡನ್‌ನ ಜೊತೆ ರಾತ್ರಿ ಮಂಚದ ಮೇಲೆ ಮಲಗಿ, ಬಹಳಷ್ಟು ಬಾರಿ ಮರುದಿನ ಬೆಳಗ್ಗೆ ನೆಲದ ಮೇಲೆ ಏಳುತ್ತಿದ್ದನು.

**ಪಠ್ಯದ ಸರಿಯಾದ ರೂಪ**

ಶ್ರೀಮತಿ ಲೈಮನ್‌ರವರು ಮಾಡಿದ್ದ ಹುಲ್ಲಿನ ಚಾಪೆಯನ್ನು ಹಾಕಿಕೊಂಡು ಜಿಪ್ ಪಂಜರದ ಒಂದು ಬದಿಯಲ್ಲಿ ಕುಳಿತು ದಬ್ಬೆಯ ಬಾಗಿಲನ್ನು ಎಳೆದು ಮುಚ್ಚಿದನು. ಪಂಜರದಲ್ಲಿ ವಾಸಿಸುವುದು ಹೇಗೆನಿಸುತ್ತದೆ ಎಂದು ಅವನು ತಿಳಿಯಲು ಇಚ್ಛಿಸಿದ. ಮೂಲೆಯಲ್ಲಿ ಒಂದು ಮೂತ್ರದ ಗಡಿಗೆ ಇತ್ತು. ಅದಕ್ಕೆ ಅವನು ಚಿಕ್ಕ ಕಂಡಿಬಾಗಿಲನ್ನು ಮಾಡಿದ್ದ. ಮುಖ್ಯದ್ವಾರದ ಚಿಲಕವನ್ನು ತೆಗೆಯದೆಯೇ ಅದನ್ನು ತೆಗೆದು ಖಾಲಿ ಮಾಡಬಹುದಾಗಿತ್ತು ಹಾಗೂ ಆಹಾರವನ್ನು ಒಳಕ್ಕೆ ನೀಡಬಹುದಾಗಿತ್ತು. ಹೊಸದಾಗಿ ಕತ್ತರಿಸಿದ್ದ ಮರದ ವಾಸನೆಯನ್ನು ಎಳೆದುಕೊಳ್ಳುತ್ತಾ ಅವನು ಸುತ್ತಲೂ ನೋಡಿದ. ಅವನು ಮತ್ತು ಶೆಲ್ಡನ್ ಒಂದು ಉತ್ತಮ ಕೆಲಸವನ್ನು ಮಾಡಿದ್ದರು. ಅದು ಸ್ವಚ್ಛವಾಗಿ, ಉತ್ತಮವಾಗಿ ಮತ್ತು ಆರಾಮದಾಯಕವಾಗಿ ಇರುವಂತೆ ಅನಿಸಿತು. ಗೊರಕೆ ಹೊಡೆಯುವ ಮುದುಕರಿಂದ ಮತ್ತು ಶೆಲ್ಡನ್‌ನ ಒದ್ದಾಟ ಹಾಗೂ ನಿರಂತರವಾದ ನಿದ್ದೆಯಲ್ಲಿನ ಮಾತುಗಳಿಂದ ದೂರದಲ್ಲಿ ತನ್ನದೇ ಆದ ಇಂತಹುದೇ ಒಂದು ಸ್ಥಳವನ್ನು ಹೊಂದಿರುವುದು ಚೆನ್ನಾಗಿರುತ್ತದೆ ಎಂದು ಅವನಿಗೆ ಅನಿಸಿತು. ಸದ್ಯ, ಕನಿಷ್ಟ ಅವನಿಗೆ ತನ್ನದೇ ಆದ ಮಂಚವಾದರೂ ಇತ್ತು. ಮೊದಲು ಅವನು ಶೆಲ್ಡನ್‌ನ ಜೊತೆ ರಾತ್ರಿ ಮಂಚದ ಮೇಲೆ ಮಲಗಿ, ಬಹಳಷ್ಟು ಬಾರಿ ಮರುದಿನ ಬೆಳಗ್ಗೆ ನೆಲದ ಮೇಲೆ ಏಳುತ್ತಿದ್ದನು.

**ಲೇಖಕಿ ರಿಚಾ ಗೋಸ್ವಾಮಿ**ಯವರು ವಿದ್ಯಾಭವನ ಎಜುಕೇಶನ್ ರಿಸೋರ್ಸ್ ಸೆಂಟರ್‌ನಲ್ಲಿ ಏಳು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದು ಭಾಷೆ ಮತ್ತು ಗಣಿತ ಬೋಧನಾ ವಿಧಾನ, ಬೋಧನಾ ಸಾಮಗ್ರಿ ಅಭಿವೃದ್ಧಿಪಡಿಸುವಿಕೆ ಮತ್ತು ಶಿಕ್ಷಕರ ತರಬೇತಿಯಲ್ಲಿ ತೊಡಗಿದ್ದಾರೆ. ಪ್ರಸ್ತುತ ಅವರು ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಶಿಯಲ್ ಸೈನ್ಸಸ್ ನಲ್ಲಿ ಪಿಎಚ್.ಡಿ. ಯನ್ನು ಮಾಡುತ್ತಿದ್ದಾರೆ. richa@vidyabhawan.org

**ಪರಾಮರ್ಶನ ಗ್ರಂಥಗಳು**


- Andersen, Hans Christian. (2014). *The brave tin soldier.* Retrieved from http://americanliterature .com/author/hans-christian-andersen/short  story/the-brave-tin-soldier.
- Paterson, Katherine. (1998). Newcomers. *Jip: His story* (23-34). Puffin Books, USA.


**ಚಿಂತನಾತ್ಮಕ ಪ್ರಶ್ನೆಗಳು:**

1. ಭಾಷಾ ತರಗತಿಯಲ್ಲಿ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಕೌಶಲ್ಯವನ್ನು ಬೆಳೆಸುವುದು ಇತರ ವಿಷಯಗಳ ಕಲಿಕೆಗೆ ಸಹಾಯಕವಾಗಬಲ್ಲದೇ? ನಿಮ್ಮ ಅಭಿಪ್ರಾಯವನ್ನು ವಿವರಿಸಿ.
2. ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಚಟುವಟಿಕೆಗಳ ಸಮಯದಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಕೇಳುವುದು ಅಥವಾ ಪ್ರಶ್ನೆಗಳ ಪಟ್ಟಿಯನ್ನು ನೀಡುವುದರಿಂದ ಆಗುವ ಪ್ರಯೋಜನಗಳನ್ನು ಪಟ್ಟಿಮಾಡಿ.
3. ಕಿರಿಯ ಮತ್ತು ಹಿರಿಯ ತರಗತಿಗಳಲ್ಲಿ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸುವ ಚಟುವಟಿಕೆಗಳನ್ನು ನೀಡುವಾಗ ಶಿಕ್ಷಕರು ಗಮನಿಸಬೇಕಾದ ಪ್ರಮುಖ ಅಂಶಗಳಾವುವು?

**ಅನುವಾದಕರು. ಡಾ. ತಾ. ಶ್ರೀ. ಗುರುರಾಜ್**

**ಪರಿಶೀಲನೆ: ಗುಂಡೂರು**

**ಮೂಲ:** Language and Language Teaching, Volume 4 Number 1 Issue 7 January 2015